ಓದಿ ಹೇಳಿ ಸರಣಿ

# ಮಿಷ್ಟು ಕಂಡ ಚಮತ್ಕಾರ

ವಿದ್ಯಾ ಮತ್ತು ರಾಜಾರಾಮ್ ಶರ್ಮ

ಪುಟ್ಟಿ ಮಿಷ್ಟು,
ತೋಟದಲ್ಲಿ ಏನೋ ನೋಡಿದಳು,
ಹಿಂದೆ ಎಂದೂ ನೋಡಿರಲಿಲ್ಲ ಅದನ್ನು.
ಏನದು? ಏನಿರಬಹುದು?
ಯೋಚಿಸಿದಳು,
ಇಡೀ ದಿನ.





ಮರು ದಿನ ಎದ್ದ ಕೂಡಲೆ,
ತೋಟಕ್ಕೆ ಓಡಿದಳು.
ಹಿಂದಿನ ದಿನ ನೋಡಿದ್ದನ್ನೇ ಮತ್ತೆ ನೋಡಿದಳು,
ಅದೇ ಸ್ಥಳದಲ್ಲಿ.

ಹತ್ತಿರ ಹೋಗಿ ನೋಡಿದಳು.
ಅಯ್ಯೋ! ಎಂದಳು,
ಇದು ಒಂದು ಚೀಲ.
ಒಳಗೆ ಏನೋ ಇದೆಯಲ್ಲಾ!





ಮಿಷ್ಟುವಿನ ಗಮನ,
ತೋಟದಲ್ಲಿದ್ದ ಆ ವಿಚಿತ್ರ ಚೀಲದ ಮೇಲೇ ಇತ್ತು,
ಇಡೀ ದಿನ.
ಮರು ದಿನ ಎದ್ದ ಕೂಡಲೆ,
ಓಡಿ ಹೋಗಿ ನೋಡಿದಳು,
ತೋಟದಲ್ಲಿದ್ದ ಅದನ್ನು.
ಅದು ಚೀಲ ಅಲ್ಲವೇನೊ,
ಹಾಗಾದರೆ ಇನ್ನೇನು ಇರಬಹುದು?
ಮತ್ತೆ ಯೋಚಿಸಿದಳು, ಇಡೀ ದಿನ.

ಹಗಲು ರಾತ್ರಿ,
ಮಿಷ್ಟುವಿಗೆ ಇದ್ದದ್ದು ಒಂದೇ ಯೋಚನೆ,
ತೋಟದಲ್ಲಿ ಇರುವುದು ಏನು?
ಮರು ದಿನ ವಿಚಿತ್ರವಾದದ್ದನ್ನು ನೋಡಿದಾಗ,
ಗಿಡ ಇರಬಹುದಾ, ಇದು?
ಗಿಡದ ಎಲೆ ಇರಬಹುದಾ, ಇದು?
ಏನಪ್ಪಾ ಇದು?
ಯೋಚಿಸಿ, ಯೋಚಿಸಿ, ಯೋಚಿಸುತ್ತಾ ಇದ್ದಳು,
ಇಡೀ ದಿನ.





ತಪ್ಪದೆ ಪ್ರತಿ ದಿನ ಓಡಿಹೋಗಿ ನೋಡಿದಳು,
ತೋಟದಲ್ಲಿದ್ದ ಅದನ್ನು.
ಅದರಲ್ಲಿ ಆಗುತ್ತಿದ್ದ ವ್ಯತ್ಯಾಸಗಳನ್ನು.
ದಿನಗಳು ಬೇಗ ಉರುಳಬಾರದೇ
ಅನ್ನಿಸಿತು, ಪುಟ್ಟ ಮಿಷ್ನುವಿಗೆ.
ಕಡೆಗೆ, ಒಂದು ದಿನ,
ಗಿಡ!
ಬೇರೆ ಏನು ಅಲ್ಲ, ಇದು ಒಂದು ಗಿಡ,
ಎಂದು ಘೋಷಿಸಿದಳು.

ಸಂಭ್ರಮದಿಂದ,
ಪ್ರತಿ ದಿನ ನೋಡಿದಳು,
ತೋಟದಲ್ಲಿದ್ದ
ಆ ಗಿಡವನ್ನು.
ಎಲೆ ಅರಳಿ ಅಗಲವಾಯಿತು.
ಇರುವುದು ಒಂದೇ ಎಲೆಯೊ,
ಆರೊ ಅಥವಾ ಹನ್ನೆರಡೊ?
ಬಹಳ ಯೋಚಿಸಿ ತೀರ್ಮಾನಿಸಿದಳು,
ಗಿಡದಲ್ಲಿ ಇದ್ದದ್ದು ಒಂದೇ ಒಂದು ಎಲೆ.





ದಿನಗಳು ಉರಳಿದಂತೆ,
ಮಿಷ್ಟುವಿಗೆ ಆದದ್ದು ಭರ್ಜರಿ ಚಿಂತೆ.
ತೋಟದಲ್ಲಿದ್ದ ಬೇರೆ ಗಿಡಗಳಲ್ಲಿ
ಹೆಚ್ಚು ಹೆಚ್ಚು ಎಲೆಗಳು ಬೆಳೆದಿದ್ದವು.
ಆದರೆ ಈ ವಿಚಿತ್ರ ಗಿಡದಲ್ಲಿ,
ಇದ್ದದ್ದು ಅದೇ ಒಂದೇ ಒಂದು ಎಲೆ.

ಅದೇ ಒಂದೇ ಒಂದು ಎಲೆಯ ಗಿಡವನ್ನು,
ಪ್ರತಿ ನಿತ್ಯ ನೋಡಿ ನೋಡಿ,
ಸಾಕಾಗಿ,
ಇನ್ನು ಬೇಕಿಲ್ಲ ಎಂದಳು,
ಆ ಒಂದೇ ಒಂದು ಎಲೆಯ ಗಿಡದ ಸುದ್ದಿ.





ಒಂದು ದಿನ,
ಥಂಡಿಯ ನವೆಂಬರ್ ತಿಂಗಳ ಒಂದು ದಿನ,
ಏಕೋ ಏನೊ ನೆನಪಿಗೆ ಬಂದಿತು,
ತೋಟದಲ್ಲಿದ್ದ,
ಆ ಒಂದೇ ಒಂದು ಎಲೆಯ ಗಿಡ.
ನೋಡಲು ಹೋದಾಗ,
ನೋಡಿ ಬೆರಗಾದಳು, ಮಿಷ್ಟು.
ಆ ಒಂದೇ ಒಂದು ಎಲೆಯ ಗಿಡ
ಒಣಗಿ ಬಿದ್ದಿತ್ತು ನೆಲದ ಮೇಲೆ!

ಮೇ ಇಂದ ನವೆಂಬರ್ ತಿಂಗಳಿನವರೆಗೂ,
ಗಿಡದಲ್ಲಿ ಇದ್ದಿದ್ದು ಒಂದೇ ಎಲೆ,
ಹೂವಿಲ್ಲ, ಕಾಯಿಯೂ ಇಲ್ಲ,
ಇಂತಹ ವಿಚಿತ್ರದ ಗಿಡ,
ಎಂದೂ ನೋಡೇ ಇರಲಿಲ್ಲ, ಮಿಷ್ಟು.



ಆ ವಿಚಿತ್ರ ಗಿಡ,
ಒಂದೇ ಎಲೆಯ ಆ ವಿಚಿತ್ರ ಗಿಡವನ್ನು
ಮರೆತು,
ಮಾರನೆಯ ದಿನ,
ಅದೇ ಜಾಗದಲ್ಲಿ,
ಮತ್ತೊಂದು ವಿಚಿತ್ರ ಅಲ್ಲದ ಗಿಡವನ್ನು,
ನೆಡಬೇಕೆಂದು,
ಮನಸ್ಸು ಮಾಡಿದಳು, ಮಿಷ್ಟು.

ಮರು ದಿನ, ವಿಚಿತ್ರ ಅಲ್ಲದ ಗಿಡ ನೆಡಲು
ನೆಲವನ್ನು ಅಗೆದಾಗ,
ಪುನಃ ಬೆರಗಾದಳು, ಮಿಷ್ಟು.
ಆ ವಿಚಿತ್ರ ಗಿಡ,
ಒಂದೇ ಎಲೆಯ ಆ ವಿಚಿತ್ರ ಗಿಡ,
ಗುಟ್ಟಾಗಿ,
ಮೇ ಇಂದ ನವೆಂಬರ್ ತಿಂಗಳವರೆಗೂ,
ನೆಲದಲ್ಲಿ ಬೆಳೆಸಿದ್ದು,
ಒಂದು ದೊಡ್ಡ ಗೆಡ್ಡೆ,
ದೊಡ್ಡದಾದ ಒಂದು ಸುವರ್ಣಗೆಡ್ಡೆ!





**ಇತರ ಶೀರ್ಷಿಕೆಗಳು**

ಮಿಷ್ಣು

ಮಿಷ್ಣು ಮಾಡಿದ ಆಯ್ಕೆ

ಮಿಷ್ಣುವಿನ ಮುಗಿಯದ ಪ್ರಶ್ನೆಗಳು

Vidya Online

A PARTNERSHIP FOR TEACHERS, CHILDREN AND EDUCATION

Visit http://vidyaonline.net for more titles